CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಫೆಬ್ರವರಿ ೫, ೨೦೦೪ (ಮಾಘ ೧೬, ಶಕ ವರ್ಷ ೧೯೨೫) | ಸಂಚಿಕೆ ೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಇವರ ಆಪ್ತ ಶಾಖೆಗೆ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2003, ದಿನಾಂಕ: 17.6.2003.

2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸಾರ್ವಜನಿಕ ದೂರುಗಳು) ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಡಿಪಿಎಆರ್ ಪಿಜಿಸಿ ಪಿಎಸ್ 93/2003, ದಿನಾಂಕ: 17.10.2003.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 17.6.2003ರ ಸರ್ಕಾರದ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ಐ.ಎ.ಎಸ್.ನ ಎಬೌ ಸೂಪರ್‌ಟೈಂ ಸ್ಕೇಲ್ ರೂ. 22400-525-24500 ರಲ್ಲಿ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಶ್ರೀ ರಾಘವನ್ ಸುರೇಶ್, ಐ.ಎ.ಎಸ್. ಇವರು ಸದರಿ ಹುದ್ದೆಯಲ್ಲಿ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ 2 ವರ್ಷಗಳ ಅವಧಿಗೆ ಸೃಜಿಸಲು ಮಂಜೂರಾತಿ ನೀಡಲಾಗಿರುತ್ತದೆ:-

| | | |
|---|---|---|
| 1 | ಆಪ್ತ ಕಾರ್ಯದರ್ಶಿ ಗ್ರೇಡ್-2 : ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2 | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |
| 3 | ಶಾಖಾಧಿಕಾರಿ : ಹಿರಿಯ ಸಹಾಯಕ | 1 ಹುದ್ದೆ |
| 4 | ವಾಹನ ಚಾಲಕ | 1 ಹುದ್ದೆ |
| 5 | ದಲಾಯತ್ | 2 ಹುದ್ದೆಗಳು |
| | ಒಟ್ಟು | 6 ಹುದ್ದೆಗಳು |

ಆದರೆ ಪ್ರಧಾನ ಕಾರ್ಯದರ್ಶಿಗಳು (ಸಾರ್ವಜನಿಕ ದೂರುಗಳು) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 17.10.2003 ರ ಅರೆ ಸರ್ಕಾರಿ ಪತ್ರದಲ್ಲಿ ತಮ್ಮ ಆಪ್ತ ಶಾಖೆಗೆ 2 ಶೀಘ್ರಲಿಪಿಗಾರರು ಹಾಗೂ 1 ಕಿರಿಯ ಸಹಾಯಕ ಹುದ್ದೆಯನ್ನು ಸೃಜಿಸಬೇಕೆಂದು ಈ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸುವಂತೆಯೂ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2003, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2003**

ಕರ್ನಾಟಕ ಸರ್ಕಾರ ಸಚಿವಾಲಯದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಇವರ ಆಪ್ತ ಶಾಖೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ಶೀಘ್ರಲಿಪಿಗಾರರ ಹುದ್ದೆ ಹಾಗೂ ಒಂದು ಕಿರಿಯ ಸಹಾಯಕ ಹುದ್ದೆಯನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 2189 ವೆಚ್ಚ-5/2003, ದಿನಾಂಕ: 15.12.2003 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 19 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

## ಕಾನೂನು ಸಚಿವಾಲಯ

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳ ನೇಮಕಾತಿ ಸಮಿತಿಗೆ ಸದಸ್ಯ ಕಾರ್ಯದರ್ಶಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 222 ಪಿಪಿಇ 2000, ದಿನಾಂಕ: 31.1.2002.
2) ಸರ್ಕಾರಿ ಆದೇಶ ಸಂಖ್ಯೆ: ಲಾ 222 ಪಿಪಿಇ 2000, ದಿನಾಂಕ: 26.2.2002.
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರ ಪತ್ರ ಸಂ. ಸಸಅ 01, ಅರಸಿ 02, ದಿನಾಂಕ: 1.12.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳನ್ನು ಭರ್ತಿ ಮಾಡಲು ಶ್ರೀ ಆರ್.ಜೆ. ದೇಸಾಯಿ, ಜಂಟಿ ಅಭಿಯೋಗ ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರನ್ನು ಆಯ್ಕೆ ಸಮಿತಿಯ ಕಾರ್ಯದರ್ಶಿಯವರನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ಸದರಿ ಆಯ್ಕೆ ಸಮಿತಿಯನ್ನು ಪುನರ್ರಚಿಸಿ ಶ್ರೀ ಆರ್.ಜೆ. ದೇಸಾಯಿ, ಜಂಟಿ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರನ್ನು ಆಯ್ಕೆ ಸಮಿತಿಯ ಕಾರ್ಯದರ್ಶಿಯವರನ್ನಾಗಿ ಮುಂದುವರೆಸಲಾಗಿತ್ತು.

ಶ್ರೀ ಆರ್.ಜೆ. ದೇಸಾಯಿ, ಜಂಟಿ ಅಭಿಯೋಗ ನಿರ್ದೇಶಕರು ರವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರಾಗಿ ಬಡ್ತಿ ಹೊಂದಿ ದಿನಾಂಕ: 1.12.2003 ರಂದು ಅಧಿಕಾರ ವಹಿಸಿಕೊಂಡಿರುವುದರಿಂದ ಸದರಿ ನೇಮಕಾತಿ ಸಮಿತಿಯ ಕಾರ್ಯದರ್ಶಿ ಸ್ಥಾನಕ್ಕೆ ಬೇರೆಯವರನ್ನು ನೇಮಕ ಮಾಡುವಂತೆ ಮೇಲೆ ಓದಲಾದ ಕ್ರಮಾಂಕ (3) ರ ತಮ್ಮ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 259 ಪಿಪಿಇ 2003, ಬೆಂಗಳೂರು, ದಿನಾಂಕ: 8ನೇ ಜನವರಿ 2004**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿನ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು ಹುದ್ದೆಗಳನ್ನು ಭರ್ತಿ ಮಾಡಲು ರಚಿಸಲಾಗಿರುವ ಆಯ್ಕೆ ಸಮಿತಿಗೆ ಶ್ರೀ ಸದಾಶಿವಮೂರ್ತಿ, ಜಂಟಿ ಅಭಿಯೋಗ ನಿರ್ದೇಶಕರು, ಅಭಿಯೋಗ ಸರ್ಕಾರಿ ವ್ಯಾಜ್ಯಗಳ ಇಲಾಖೆ, ನಿರ್ದೇಶನಾಲಯ, ಬೆಂಗಳೂರು ಇವರನ್ನು ಕಾರ್ಯದರ್ಶಿಯಾಗಿ ನೇಮಿಸಲಾಗಿದೆ.

2) ಸಭೆಯಲ್ಲಿ ಹಾಜರಿರಬೇಕಾದ ಸದಸ್ಯರ ನಿಯಮಿತ ಕನಿಷ್ಠ ಸಂಖ್ಯೆಯು (ಮೀಟಿಂಗ್ ಕೋರಂ) ಮೂರು ಆಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 21 ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ತಾಲ್ಲೂಕು ಮಟ್ಟದ ಆಸ್ಪತ್ರೆಯಲ್ಲಿ ಹೆಚ್ಚುವರಿಯಾಗಿರುವ ದಂತ ಆರೋಗ್ಯಾಧಿಕಾರಿಗಳ ಹುದ್ದೆಯನ್ನು ಜಿಲ್ಲಾ ಆಸ್ಪತ್ರೆಗಳಿಗೆ ಸ್ಥಳಾಂತರಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 498 ಎಂಎಸ್ಎಸ್ 2000 ದಿನಾಂಕ: 14.3.2001.
2) ನಿರ್ದೇಶಕರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಎಲ್ಆರ್ಒ/11/2003-04, ದಿನಾಂಕ: 7.11.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕ ಆಸ್ಪತ್ರೆ ಜಗಳೂರು, ದಾವಣಗೆರೆ ಜಿಲ್ಲೆ, ಸಮುದಾಯ ಆರೋಗ್ಯ ಕೇಂದ್ರ, ಹಿರೀಸಾವೆ, ಹಾಸನ ಜಿಲ್ಲೆ, ಇಲ್ಲಿಗೆ 2 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ಗುರುತಿಸಿ, ಮಂಜೂರಾತಿ ನೀಡಲಾಗಿದೆ. ಅದೇ ಆದೇಶದಲ್ಲಿ ಜಿಲ್ಲಾ ಆಸ್ಪತ್ರೆ ಚಿಕ್ಕಮಗಳೂರು, ಇಲ್ಲಿಗೆ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಗುರುತಿಸಿ ಮಂಜೂರು ಮಾಡಲಾಗಿದೆ ಹಾಗೂ ಜಿಲ್ಲಾ ಆಸ್ಪತ್ರೆ, ಚಾಮರಾಜನಗರ ಇಲ್ಲಿಗೆ ದಂತ ಆರೋಗ್ಯಾಧಿಕಾರಿ ಹುದ್ದೆ ಮಂಜೂರಾಗಿರುವುದಿಲ್ಲ. ಈ ಜಿಲ್ಲಾ ಆಸ್ಪತ್ರೆಗಳಲ್ಲಿ ರೋಗಿಗಳ ಸಂಖ್ಯೆ ಅಧಿಕವಾಗುತ್ತಿರುವುದರಿಂದ ದಂತ ಆರೋಗ್ಯಾಧಿಕಾರಿಯ ಹುದ್ದೆ

ಅವಶ್ಯಕತೆಯಿದ್ದು, ಸಾರ್ವಜನಿಕ ಆಸ್ಪತ್ರೆ : ಸಮುದಾಯ ಆರೋಗ್ಯ ಕೇಂದ್ರಗಳಾದ ಜಗಳೂರು, ಹಿರೀಸಾವೆ ಇಲ್ಲಿ ಇರುವ 2 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳ ಪೈಕಿ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಹಾಗೂ ಅದಕ್ಕೆ ಸಂಬಂಧಪಟ್ಟ ಡೆಂಟಲ್ ಕುರ್ಚಿ, ಉಪಕರಣ ಮತ್ತು ಸಲಕರಣೆಗಳನ್ನು ಜಿಲ್ಲಾ ಆಸ್ಪತ್ರೆಗಳಾದ ಚಿಕ್ಕಮಗಳೂರು, ಚಾಮರಾಜನಗರ, ಇಲ್ಲಿಗೆ ಸ್ಥಳಾಂತರಿಸಬೇಕೆಂದು ಹಾಗೂ ಇದಕ್ಕೆ ಯಾವುದೇ ಅಧಿಕ ಹೊರೆ ಬೀಳುವುದಿಲ್ಲವೆಂದು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಕ್ರಮಾಂಕ (2) ರಲ್ಲಿ ಓದಲಾಗಿರುವ ಪತ್ರದಲ್ಲಿ ಕೋರಿರುತ್ತಾರೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 118 ಹೆಚ್‌ಎಸ್‌ಡಿ 2003, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಈ ಕೆಳಕಂಡ ಸಾರ್ವಜನಿಕ ಆಸ್ಪತ್ರೆಗಳಲ್ಲಿ 2 (ಎರಡು) ದಂತ ಆರೋಗ್ಯ ಅಧಿಕಾರಿ ಹುದ್ದೆಗಳ ಪೈಕಿ 1 (ಒಂದು) ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಅದಕ್ಕೆ ಸಂಬಂಧಪಟ್ಟ ಡೆಂಟಲ್ ಕುರ್ಚಿ, ಉಪಕರಣ ಮತ್ತು ಸಲಕರಣೆಗಳೊಂದಿಗೆ ಈ ಕೆಳಕಂಡ ಜಿಲ್ಲಾ ಆಸ್ಪತ್ರೆಗಳಿಗೆ ಸ್ಥಳಾಂತರಿಸಲಾಗಿದೆ:

1) ಸಾರ್ವಜನಿಕ ಆಸ್ಪತ್ರೆ, ಜಗಳೂರು, ದಾವಣಗೆರೆ ಜಿಲ್ಲೆ - ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು

2) ಸಮುದಾಯ ಆರೋಗ್ಯ ಕೇಂದ್ರ, ಹಿರೀಸಾವೆ, ಹಾಸನ ಜಿಲ್ಲೆ - ಜಿಲ್ಲಾ ಆಸ್ಪತ್ರೆ, ಚಾಮರಾಜನಗರ

ಇದರ ಪರಿಣಾಮವಾಗಿ ಸರ್ಕಾರಿ ಆದೇಶ ಸಂಖ್ಯೆ: ಆಕುಕ 498 ಎಂಎಸ್‌ಎಸ್ 2000 (1) ದಿನಾಂಕ: 14.3.2001 ರಲ್ಲಿ ಮೇಲ್ಕಂಡ ಆಸ್ಪತ್ರೆಗಳಲ್ಲಿ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆ ಹಾಗೂ ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು ಇಲ್ಲಿ 2 ದಂತ ಆರೋಗ್ಯಾಧಿಕಾರಿ ಹುದ್ದೆ ಮತ್ತು ಜಿಲ್ಲಾ ಆಸ್ಪತ್ರೆ ಚಾಮರಾಜನಗರ 1 ದಂತ ಆರೋಗ್ಯಾಧಿಕಾರಿ ಹುದ್ದೆಗಳೆಂದು ಗುರುತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಪಿ.ಆರ್. 22

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಪ್ರಥಮ ವರ್ಷದ ಡಿಪ್ಲೊಮಾ ಪ್ರವೇಶಕ್ಕೆ ನಿಗದಿಪಡಿಸಿರುವ ಕನಿಷ್ಟ ವಿದ್ಯಾರ್ಹತೆಯಲ್ಲಿ ಮಾರ್ಪಾಡು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ: ಇಡಿ 98 ಟಿಪಿಇ 2003 ದಿನಾಂಕ: 30.5.2003.

2) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 44 ಎಸಿಎಂ (2) 2003, ದಿನಾಂಕ: 30.9.2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪ್ರಥಮ ವರ್ಷದ ಡಿಪ್ಲೊಮಾ ಪ್ರವೇಶಕ್ಕೆ ಇರಬೇಕಾದ ಕನಿಷ್ಟ ವಿದ್ಯಾರ್ಹತೆಯಲ್ಲಿ 2003-04ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ವಿದ್ಯಾರ್ಹತೆಯನ್ನು ಮಾರ್ಪಡಿಸಿ ಆದೇಶ ಹೊರಡಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ದಿನಾಂಕ: 30.9.2003 ರ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶಕರು ಪರಿಷ್ಕರಣೆಯು 2003-04ನೇ ಸಾಲಿನಿಂದ ಜಾರಿಗೆ ಬಂದಿದ್ದು ಪ್ರವೇಶ ಸಮಯದಲ್ಲಿ ಸರ್ಕಾರಿ / ಅನುದಾನಿತ ಹಾಗೂ ಖಾಸಗಿ ಪಾಲಿಟೆಕ್ನಿಕ್‌ಗಳಲ್ಲಿ ಕೆಳಕಂಡ ಅಂಶಗಳು ಗಮನಕ್ಕೆ ಬಂದಿರುತ್ತವೆ ಎಂದು ತಿಳಿಸಿರುತ್ತಾರೆ.

1. ಕನಿಷ್ಟ ವಿದ್ಯಾರ್ಹತೆಯಲ್ಲಿ ಸಡಿಲಿಕೆ ಮಾಡಿದ್ದರಿಂದ ಇಂಜಿನಿಯರಿಂಗ್ ಕೋರ್ಸುಗಳ ಪ್ರವೇಶಕ್ಕೆ ಬಂದಿರುವ ಹೊರ ರಾಜ್ಯದ ಅಭ್ಯರ್ಥಿಗಳ ಪೈಕಿ ಕೆಲವೊಂದು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಗಣಿತ ಮತ್ತು ವಿಜ್ಞಾನ ವಿಷಯಗಳಲ್ಲಿ ಅನುತ್ತೀರ್ಣರಾಗಿದ್ದರೂ ಒಟ್ಟಾರೆ ಸರಾಸರಿ ಆಧಾರದ ಮೇಲೆ ಉತ್ತೀರ್ಣ ಎಂದು ಘೋಷಿಸಿರುವ ಪ್ರಕರಣಗಳು ಈ ಸಾಲಿನ ಪ್ರವೇಶದಲ್ಲಿ ಕಂಡು ಬಂದಿರುತ್ತದೆ.
2. ಇದರಿಂದ ತಾಂತ್ರಿಕ ಹಿನ್ನೆಲೆಯುಳ್ಳ ಕೋರ್ಸುಗಳಿಗೆ ಬೇಕಾದ ಕನಿಷ್ಟ ತಾಂತ್ರಿಕ ಜ್ಞಾನವಿಲ್ಲದೆ ಇರುವ ಅಭ್ಯರ್ಥಿಗಳಿಗೂ ಪ್ರವೇಶ ನೀಡುವ ಬಗ್ಗೆ ಅರ್ಹತಾ ಪತ್ರವನ್ನು ವಿತರಿಸುವಲ್ಲಿ ತಾಂತ್ರಿಕ ತೊಂದರೆ ಉಂಟಾಗಿರುತ್ತದೆ.
3. ಪ್ರಸ್ತುತ ಕರ್ನಾಟಕ ಎಸ್.ಎಸ್.ಎಲ್.ಸಿ. ಯಲ್ಲಿ ಅಭ್ಯರ್ಥಿಯು ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ಒಳಗೊಂಡಂತೆ ಎಲ್ಲಾ ವಿಷಯಗಳಲ್ಲೂ ಉತ್ತೀರ್ಣರಾಗಿದ್ದಲ್ಲಿ ಮಾತ್ರ ಉತ್ತೀರ್ಣ ಎಂದು ಘೋಷಿಸಲಾಗುತ್ತದೆ.
4. ಆದರೆ ಮೇಲೆ ವಿವರಿಸಿದ ಸಂದರ್ಭದಲ್ಲಿ ಇತರೇ ರಾಜ್ಯದಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿನ ಗಣಿತ ಅಥವಾ ವಿಜ್ಞಾನ ವಿಷಯಗಳಲ್ಲಿ ಅನುತ್ತೀರ್ಣ ಆಗಿದ್ದರೂ ಒಟ್ಟಾರೆ ಗಳಿಸಿರುವ ಅಂಕಗಳನ್ನು ಸರಾಸರಿ ಆಧಾರದ ಮೇಲೆ ಹಾಗೂ ಕೆಲವೊಮ್ಮೆ ಗ್ರೇಸ್ (Grace) ಅಂಕಗಳನ್ನು ನೀಡಿ ಉತ್ತೀರ್ಣ ಎಂದು ಘೋಷಿಸಲಾಗುತ್ತಿದೆ.
5. ಕರ್ನಾಟಕ ಎಸ್.ಎಸ್.ಎಲ್.ಸಿ. ಹೊರತುಪಡಿಸಿ ಇತರೇ ರಾಜ್ಯಗಳ ಪೈಕಿ ಕೆಲವೊಂದು ರಾಜ್ಯಗಳು ಮೇಲ್ಕಂಡಂತೆ ಫಲಿತಾಂಶಗಳನ್ನು ಪ್ರಕಟಿಸುತ್ತಿರುವುದರಿಂದ ಕರ್ನಾಟಕ ರಾಜ್ಯದಲ್ಲಿ ಪ್ರವೇಶ ಬಯಸಿ ಬರುವ ಅಭ್ಯರ್ಥಿಗಳಿಗೆ ಪ್ರವೇಶ ನೀಡುವ ಬಗ್ಗೆ ಹಾಗೂ ಅರ್ಹತಾ ಪತ್ರವನ್ನು ವಿತರಿಸುವ ಸಂಬಂಧದಲ್ಲಿ ಆಗುತ್ತಿರುವ ತಾಂತ್ರಿಕ ಹಾಗೂ ಆಡಳಿತಾತ್ಮಕ ತೊಂದರೆಯನ್ನು ಗಮನದಲ್ಲಿರಿಸಿಕೊಂಡು ತಾಂತ್ರಿಕ ಶಿಕ್ಷಣ ಕೋರ್ಸುಗಳಿಗೆ ಅನ್ವಯವಾಗುವಂತೆ ಬೇಕಾಗಿರುವ ಕನಿಷ್ಟ ತಾಂತ್ರಿಕ ಜ್ಞಾನವನ್ನು ಗಣನೆಗೆ ತೆಗೆದುಕೊಂಡು ಎಸ್.ಎಸ್.ಎಲ್.ಸಿ. ಯಲ್ಲಿ ಉತ್ತೀರ್ಣ ಜೊತೆಗೆ ಗಣಿತ ಮತ್ತು ವಿಜ್ಞಾನ ವಿಷಯಗಳಲ್ಲಿ ಉತ್ತೀರ್ಣರಾಗಿರಬೇಕು ಎಂದು ಮಾರ್ಪಾಡು ಮಾಡುವುದು ಸೂಕ್ತವಾಗಿರುತ್ತದೆ ಎಂದು ಪ್ರಸ್ತಾಪಿಸುತ್ತಾ ಈ ಕೆಳಕಂಡಂತೆ ಮಾರ್ಪಾಡು ಮಾಡಿ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಪ್ರಸ್ತುತ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ಕನಿಷ್ಟ ಅಂಕಗಳು | ಮಾರ್ಪಾಡು ಮಾಡಬೇಕಾದ ವಿದ್ಯಾರ್ಹತೆ ಮತ್ತು ಕನಿಷ್ಟ ಅಂಕಗಳು |
|---|---|---|
| 1 | 2 | 3 |
| 1.<br>ಅ) ಸಿನಿಮಾಟೋಗ್ರಫಿ<br>ಆ) ಸೌಂಡ್‌ರೆಕಾರ್ಡಿಂಗ್ ಮತ್ತು ಇಂಜಿನಿಯರಿಂಗ್ | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಅಲ್ಲದೆ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪಿ.ಸಿ.ಎಂ. ವಿಷಯಗಳನ್ನು ವ್ಯಾಸಂಗ ಮಾಡಿರಬೇಕು | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ಕರ್ನಾಟಕ ಅಥವಾ ಇತರೇ ರಾಜ್ಯದ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಪಿ.ಸಿ.ಎಂ. ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) |
| 2. ಡಿಪ್ಲೊಮಾ ಇಂಜಿನಿಯರಿಂಗ್ | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಅಲ್ಲದೆ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ವ್ಯಾಸಂಗ ಮಾಡಿರಬೇಕು | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ಕರ್ನಾಟಕ ಅಥವಾ ಇತರೇ ರಾಜ್ಯದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) |

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 346 ಟಿಪಿಇ 2003, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2003**

6. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ತಾಂತ್ರಿಕ ಶಿಕ್ಷಣದ ಗುಣಮಟ್ಟದ ಹಿತದೃಷ್ಟಿಯಿಂದ ಪ್ರಥಮ ವರ್ಷದ ಡಿಪ್ಲೋಮಾ ಪ್ರವೇಶಕ್ಕೆ 2004-05ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: ಇಡಿ 98 ಟಿಪಿಇ 2003 ದಿನಾಂಕ: 30.5.2003ನ್ನು ಭಾಗಶಃ ಮಾರ್ಪಡಿಸಿ ಈ ಕೆಳಕಂಡಂತೆ ವಿದ್ಯಾರ್ಹತೆಯನ್ನು ನಿಗದಿಪಡಿಸಲಾಗಿದೆ.

| ಕ್ರಮ ಸಂಖ್ಯೆ | ಹಿಂದೆ ನಿಗದಿಪಡಿಸಿದ್ದ ವಿದ್ಯಾರ್ಹತೆ ಮತ್ತು ಕನಿಷ್ಟ ಅಂಕಗಳು | ಮಾರ್ಪಾಡು ಮಾಡಿರುವ ವಿದ್ಯಾರ್ಹತೆ ಮತ್ತು ಕನಿಷ್ಟ ಅಂಕಗಳು |
|---|---|---|
| 1 | 2 | 3 |
| 1.<br>ಅ) ಸಿನಿಮಾಟೋಗ್ರಫಿ<br>ಆ) ಸೌಂಡ್‌ರೆಕಾರ್ಡಿಂಗ್ ಮತ್ತು ಇಂಜಿನಿಯರಿಂಗ್ | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಅಲ್ಲದೆ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪಿ.ಸಿ.ಎಂ. ವಿಷಯಗಳನ್ನು ವ್ಯಾಸಂಗ ಮಾಡಿರಬೇಕು | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ಕರ್ನಾಟಕ ಅಥವಾ ಇತರೇ ರಾಜ್ಯದ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಪಿ.ಸಿ.ಎಂ. ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) |
| 2. ಡಿಪ್ಲೊಮಾ ಇಂಜಿನಿಯರಿಂಗ್ | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಅಲ್ಲದೆ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ವ್ಯಾಸಂಗ ಮಾಡಿರಬೇಕು | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ**<br>ಕರ್ನಾಟಕ ಅಥವಾ ಇತರೇ ರಾಜ್ಯದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 23

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎಸ್.ಎಂ. ಮೇಜರ್ ರಾಜೇಶ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾ.ಆ. ಕೇಂದ್ರ, ಅತ್ತಿಹಳ್ಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ, ಇವರನ್ನು ಸೇವೆಯಿಂದ ವಿಮುಕ್ತಿಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 648 ಹೆಚ್‌ಎಸ್‌ಹೆಚ್ 2002, ದಿನಾಂಕ: 24.8.2003.

2) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ: ಮೈ.ವಿ : 27 : 2003-04, ದಿನಾಂಕ: 23.9.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 24.8.2003 ರನ್ವಯ ಡಾ: ಎಸ್.ಎಂ. ಮೇಜರ್ ರಾಜೇಶ್, ಇವರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ, ಅತ್ತಿಹಳ್ಳಿ, ಸಕಲೇಶಪುರ ತಾಲ್ಲೂಕು, ಇಲ್ಲಿಗೆ ಎರಡು ವರ್ಷಗಳ ಖಾಯಂ ಪೂರ್ವ ಸೇವಾ ಅವಧಿಯ ಮೇರೆಗೆ ಹಂಗಾಮಿಯಾಗಿ ನೇಮಕಾತಿ ಮಾಡಲಾಗಿತ್ತು. ಸದರಿ ವೈದ್ಯರು ನೇಮಕಾತಿ ಮಾಡಿದ ಸ್ಥಳದಲ್ಲಿ ದಿನಾಂಕ: 12.9.2002 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 23-9-2003 ರ ಪತ್ರದಲ್ಲಿ ವರದಿ ಮಾಡುತ್ತಾ, ಡಾ: ಎಸ್.ಎಂ. ಮೇಜರ್ ರಾಜೇಶ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅತ್ತಿಹಳ್ಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ, ಇವರು ಮೇಲ್ಕಂಡ ಆದೇಶದನ್ವಯ ಹೊಸದಾಗಿ ನೇಮಕಾತಿ ಹೊಂದಿ ದಿನಾಂಕ: 12.9.2002 ರಂದು ಒಂದು ದಿನದ ಮಟ್ಟಿಗೆ ಕರ್ತವ್ಯ ನಿರ್ವಹಿಸಿ, ನಂತರ ಕರ್ತವ್ಯಕ್ಕೆ ಗೈರು ಹಾಜರಾಗುವ ಮೂಲಕ ಖಾಯಂ ಪೂರ್ವ ಸೇವಾ ಅವಧಿಯಲ್ಲಿಯೇ ಅಸಮರ್ಥರೆಂದು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 783 ಹೆಚ್‌ಎಸ್‌ಹೆಚ್ 2003, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಡಾ: ಎಸ್.ಎಂ. ಮೇಜರ್ ರಾಜೇಶ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅತ್ತಿಹಳ್ಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ, ಇವರು ನೇಮಕಾತಿ ಹೊಂದಿದ ಹುದ್ದೆಯಲ್ಲಿ ಮುಂದುವರಿಯಲು ಅಸಮರ್ಥರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977ರ ನಿಯಮ 6(1)(2) ರನ್ವಯ ಸೇವೆಯಿಂದ ವಿಮುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಪಿ.ಆರ್. 25

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕಿನ ಕಾಗೋಡು ಪ್ರಾಥಮಿಕ ಆರೋಗ್ಯ ಘಟಕದಲ್ಲಿ ಹೆಚ್ಚುವರಿಯಾಗಿರುವ ಒಂದು ವೈದ್ಯಾಧಿಕಾರಿ ಹುದ್ದೆಯನ್ನು ಪ್ರಾಥಮಿಕ ಆರೋಗ್ಯ ಕೇಂದ್ರ, ಬಂದಗದ್ದೆ, ಇಲ್ಲಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆಕುಕ ಸೇವೆಗಳು, ಇವರ ಪತ್ರ ಸಂಖ್ಯೆ: ಜೆಆರ್‌ಓ(1) 205: 2003-04, ದಿನಾಂಕ: 25.11.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ಪತ್ರದಲ್ಲಿ, ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಬಂದಗದ್ದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಇಲ್ಲಿಗೆ ಒಂದು ವೈದ್ಯಾಧಿಕಾರಿ ಹುದ್ದೆ ಮಂಜೂರಾಗಿದ್ದು, ಇನ್ನೊಂದು ವೈದ್ಯಾಧಿಕಾರಿಗಳ ಹುದ್ದೆಯ ಅವಶ್ಯಕತೆಯಿರುವುದರಿಂದ, ಅದೇ ತಾಲ್ಲೂಕಿನ ಕಾಗೋಡು ಪ್ರಾಥಮಿಕ ಆರೋಗ್ಯ ಘಟಕಕ್ಕೆ 2 ವೈದ್ಯಾಧಿಕಾರಿ ಹುದ್ದೆಗಳು ಮಂಜೂರಾಗಿದ್ದು, ಸದರಿ ಪ್ರಾಥಮಿಕ ಆರೋಗ್ಯ ಘಟಕದಲ್ಲಿ ಇಬ್ಬರು ವೈದ್ಯಾಧಿಕಾರಿಗಳ ಅವಶ್ಯಕತೆ ಕಂಡು ಬರುವುದಿಲ್ಲವಾದ್ದರಿಂದ ಪ್ರಾಥಮಿಕ ಆರೋಗ್ಯ ಘಟಕ, ಕಾಗೋಡಿನಲ್ಲಿ ಹೆಚ್ಚುವರಿಯಾಗಿರುವ ಒಂದು ವೈದ್ಯಾಧಿಕಾರಿ ಹುದ್ದೆಯನ್ನು ಮಹಿಳಾ ವೈದ್ಯಾಧಿಕಾರಿ ಎಂದು ಪದನಾಮೀಕರಿಸಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಂದಗದ್ದೆ, ಸಾಗರ ತಾಲ್ಲೂಕು, ಇಲ್ಲಿಗೆ ಸ್ಥಳಾಂತರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 909 ಹೆಚ್‌ಎಸ್‌ಹೆಚ್ 2003, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕಿನ ಕಾಗೋಡು ಪ್ರಾಥಮಿಕ ಆರೋಗ್ಯ ಘಟಕದಲ್ಲಿ ಎರಡು ವೈದ್ಯಾಧಿಕಾರಿ ಹುದ್ದೆಗಳ ಪೈಕಿ ಒಂದು ವೈದ್ಯಾಧಿಕಾರಿ ಹುದ್ದೆಯನ್ನು ಸಾಗರ ತಾಲ್ಲೂಕಿನ ಬಂದಗದ್ದೆ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಮಹಿಳಾ ವೈದ್ಯಾಧಿಕಾರಿ ಹುದ್ದೆಯೆಂದು ಪದನಾಮೀಕರಿಸಿ, ಸ್ಥಳಾಂತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಪಿ.ಆರ್. 26

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಆರ್ಥಿಕ ಸಚಿವಾಲಯ**

**ವಿಷಯ:** ಸರ್ಕಾರದ ವೆಚ್ಚಗಳಲ್ಲಿ ಕಟ್ಟುನಿಟ್ಟಿನ ಆರ್ಥಿಕ ಮಿತವ್ಯಯ ಕ್ರಮಗಳ ಪಾಲನೆ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಇ 3 ಬಿಇಎಂ 2001, ದಿನಾಂಕ: 5.9.2003.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32 ರನ್ವಯ ಅಧಿಕಾರಿಗಳನ್ನು/ ನೌಕರರನ್ನು ಸ್ವತಂತ್ರ ಪ್ರಭಾರದಲ್ಲಿರಿಸುವ ಮುನ್ನ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯುವುದು ಅಗತ್ಯವಿಲ್ಲವೆಂದು ಹೇಳಲಾಗಿತ್ತು. ಅಲ್ಲದೆ ಒಂದು ವೇಳೆ ಸ್ವತಂತ್ರ ಪ್ರಭಾರದಲ್ಲಿರಿಸಿರುವ ಅಧಿಕಾರಿ / ನೌಕರರುಗಳಿಗೆ ಪೂರ್ವಾನ್ವಯವಾಗಿ ಬಡ್ತಿ ನೀಡಬೇಕೆಂದು ಆಡಳಿತ ಇಲಾಖೆಯು ನಿರ್ಧರಿಸಿದ್ದಲ್ಲಿ, ಅಂತಹ ಪ್ರಸ್ತಾವನೆಗಳಿಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಕಡ್ಡಾಯವಾಗಿ ಪಡೆಯಬೇಕೆಂದು ತಿಳಿಸಲಾಗಿತ್ತು. ಕೆಲವು ಇಲಾಖೆಗಳು ಆರ್ಥಿಕ ಇಲಾಖೆಯ ಪೂರ್ವಾನುಮತಿ ಇಲ್ಲದೇ ಪ್ರಭಾರದಲ್ಲಿರಿಸಿರುವ ಅಧಿಕಾರಿ / ನೌಕರರುಗಳಿಗೆ ಪೂರ್ವಾನ್ವಯವಾಗಿ ಬಡ್ತಿ ನೀಡಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದರಿಂದ, ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 3 ಬಿಇಎಂ 2001 (ಭಾಗ-III), ಬೆಂಗಳೂರು, ದಿನಾಂಕ: 9ನೇ ಜನವರಿ 2004**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32ರ ಅನ್ವಯ ಅಧಿಕಾರಿಗಳನ್ನು / ನೌಕರರನ್ನು ಸ್ವತಂತ್ರ ಪ್ರಭಾರದಲ್ಲಿರಿಸುವ ಮುನ್ನ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯುವುದು ಅಗತ್ಯವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹದೇವ**

ಪಿ.ಆರ್. 27

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆರ್ಥಿಕ ಆಯೋಗ ಕೋಶ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಿಆಸುಇ 73 ಸಸಿವಿ 2003, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2003**

ಇದೇ ಕ್ರಮ ಸಂಖ್ಯೆಯ ದಿನಾಂಕ: 18.8.2003 ರ ಸರ್ಕಾರಿ ಆದೇಶ ಹಾಗೂ ದಿನಾಂಕ: 12.9.2003 ರ ತಿದ್ದುಪಡಿ ಆದೇಶದಲ್ಲಿನ ಕಂಡಿಕೆ 2ರ ಮೊದಲನೆ ಸಾಲಿನಲ್ಲಿ ಬರುವ ವಾಕ್ಯ ವೃಂದವನ್ನು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ಹೆಚ್ಚುವರಿ ಹುದ್ದೆಗಳನ್ನು ಗುರುತಿಸುವ ಸಲುವಾಗಿ ಎಂಬ ಪದಗಳ ಬದಲಾಗಿ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಗುರುತಿಸಲಾದ ಹೆಚ್ಚುವರಿ ಸಿಬ್ಬಂದಿಯನ್ನು ಮರುವಿನ್ಯಾಸಗೊಳಿಸುವ ಸಲುವಾಗಿ ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಸದರಿ ಸೆಲ್‌ನ ಕಾರ್ಯವನ್ನು ನಿರ್ವಹಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ವಿಭಾಗದ ಅಧಿಕಾರಿ : ಸಿಬ್ಬಂದಿ ವರ್ಗದವರನ್ನು ನೇಮಿಸಿರುವುದನ್ನು ಮಾರ್ಪಡಿಸಿ ಈ ಕಾರ್ಯವನ್ನು ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವಾ ನಿಯಮ-3) ಹಾಗೂ (ಸೇವಾ ನಿಯಮ-ಡಿ) ಶಾಖೆಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 28

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಆರ್. ಚಂದ್ರಶೇಖರ್, ನಿವೃತ್ತ ಪ್ರಧಾನ ಇಂಜಿನೀಯರ್ ಅವರ ವಿರುದ್ಧದ ಇಲಾಖಾ ವಿಚಾರಣೆ - ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 17 ಎಸ್‌ಇಎನ್ 90, ದಿನಾಂಕ: 7.2.98.

2) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 283:01, ದಿನಾಂಕ: 30.7.2003.

**ಪ್ರಸ್ತಾವನೆ:**

ಕರ್ನಾಟಕ ಗೃಹ ಮಂಡಳಿಯಲ್ಲಿ ಸೂಪರಿಂಟೆಂಡಿಂಗ್ ಇಂಜಿನೀಯರ್ ಹುದ್ದೆಯಲ್ಲಿ 1981-84ರ ಅವಧಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ವಿವಿಧ ವರ್ಗಗಳಿಗೆ ಚಿತ್ರದುರ್ಗದಲ್ಲಿ ಮಂಡಳಿಯ ವತಿಯಿಂದ ನಿರ್ಮಿಸಲಾದ ಮನೆಗಳ ನಿರ್ಮಾಣ ಕಾರ್ಯದಲ್ಲಿ ಸರಿಯಾದ ಮೇಲುಸ್ತುವಾರಿ ವಹಿಸದೆ ಅನೇಕ ಮನೆಗಳ ಗೋಡೆಗಳಲ್ಲಿ ಬಿರುಕು ಕಾಣಿಸಿಕೊಂಡ ಕಾರಣ ಅವುಗಳು ವಾಸಕ್ಕೆ ಅನರ್ಹವಾಗಲು ಕಾರಣರಾದ ಆರೋಪಕ್ಕಾಗಿ ಶ್ರೀ ಆರ್. ಚಂದ್ರಶೇಖರ್, ನಿವೃತ್ತ ಪ್ರಧಾನ ಇಂಜಿನೀಯರ್ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 7.2.98ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಅಪರ ನಿಬಂಧಕರು, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಈ ವಿಚಾರಣೆಯನ್ನು ಪ್ರಶ್ನಿಸಿ ಶ್ರೀ ಆರ್. ಚಂದ್ರಶೇಖರ್ ಅವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 33181:99 ಅನ್ನು ಸಲ್ಲಿಸಿ ವಿಚಾರಣೆಗೆ ತಡೆಯಾಜ್ಞೆ ಪಡೆದರು. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಪುನರ್ ರಚನೆಯಾದ ಬಳಿಕ ಅದು ಅರ್ಜಿ ಸಂಖ್ಯೆ: 283:2001 ಆಗಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ವರ್ಗಾಯಿಸಲ್ಪಟ್ಟಿತು.

ಮೇಲೆ (2) ರಲ್ಲಿ ಓದಲಾದ ದಿನಾಂಕ: 30.7.2003 ರ ಆದೇಶದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು, ದಿನಾಂಕ: 2.12.1991ರ ನೋಟೀಸ್ ನೀಡುವ ಮೂಲಕ ಹೂಡಲಾದ ಇಲಾಖಾ ವಿಚಾರಣೆಯನ್ನು ಅಸಿಂಧುಗೊಳಿಸಿತು. ಈ ಅಂಶಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶವನ್ನು ಒಪ್ಪಿಕೊಂಡ ಸರ್ಕಾರವು ಅದನ್ನು ಅನುಷ್ಠಾನಗೊಳಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 17 ಎಸ್‌ಇಎನ್ 90, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಆರ್. ಚಂದ್ರಶೇಖರ್, ನಿವೃತ್ತ ಪ್ರಧಾನ ಇಂಜಿನೀಯರ್ ಅವರನ್ನು ದಿನಾಂಕ: 2.12.1991ರ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸುತ್ತದೆ. ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 29

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಫಾಸ್ಟ್ ಟ್ರ್ಯಾಕ್ ಕೋರ್ಟುಗಳ ಪ್ರಿಸೈಡಿಂಗ್ ಅಧಿಕಾರಿಗಳಿಗೆ ದೂರವಾಣಿ ಸೌಲಭ್ಯ ಒದಗಿಸುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ರವರ ಪತ್ರ ಸಂಖ್ಯೆ: ಜಿಓಬಿ (1): 585 : 2000, ದಿನಾಂಕ: 18.8.2003 ರಲ್ಲಿ ಕೊನೆಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ:**

ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಮೇಲೆ ಓದಲಾದ ತಮ್ಮ ಪತ್ರಗಳಲ್ಲಿ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿಗಳು ಜಿಲ್ಲಾ ನ್ಯಾಯಾಧೀಶರುಗಳ ಪದವೃಂದದವರಾಗಿದ್ದು ಇವರಿಗೆ ಕಾರ್ಯನಿರ್ವಹಿಸಲು ದೂರವಾಣಿ ಸೌಲಭ್ಯ ಅತಿ ಅವಶ್ಯಕವಾಗಿರುತ್ತದೆಯೆಂದೂ ಸೆಷನ್ ಪ್ರಕರಣಗಳ ಇತ್ಯರ್ಥಕ್ಕಾಗಿ ಪೊಲೀಸ್ ಅಧಿಕಾರಿಗಳಿಂದ, ಮಾಹಿತಿಯನ್ನು ಪಡೆಯುವ ಅಗತ್ಯವಿದ್ದು ಇದಕ್ಕಾಗಿ ದೂರವಾಣಿಯ ಅವಶ್ಯಕತೆ ಇರುವುದೆಂದು ತಿಳಿಸಿ ಸದರಿ ಪ್ರಿಸೈಡಿಂಗ್ ಅಧಿಕಾರಿಗಳ ಕಛೇರಿ ಹಾಗೂ ನಿವಾಸಕ್ಕೆ ದೂರವಾಣಿ ಸೌಲಭ್ಯವನ್ನು ಒದಗಿಸಬೇಕೆಂದು ಕೋರಿರುತ್ತಾರೆ. ರಾಜ್ಯದಲ್ಲಿ 36 ಕ್ಷಿಪ್ರ ವಿಚಾರಣಾ ನ್ಯಾಯಾಲಯಗಳು ಸ್ಥಾಪನೆಯಾಗಿದ್ದು, ಅವುಗಳಲ್ಲಿ 25 ನ್ಯಾಯಾಲಯಗಳು ಕಾರ್ಯ ನಿರ್ವಹಿಸುತ್ತಿವೆ ಎಂದು ತಿಳಿಸಿ ಸದರಿ ಕೋರ್ಟುಗಳ ಉಪಯೋಗಕ್ಕಾಗಿ ಟೆಲಿಫೋನ್ ಸ್ಥಾಪಿಸುವ ವೆಚ್ಚ ಸೇರಿ ಬೆಂಗಳೂರು ನಗರದಲ್ಲಿರುವ ಕೋರ್ಟುಗಳ ಸಲುವಾಗಿ ಪ್ರತಿ ದೂರವಾಣಿಗೆ ರೂ. 3,900.00 ಗಳಂತೆ ಹಾಗೂ ಬೆಂಗಳೂರು ನಗರವನ್ನು ಹೊರತುಪಡಿಸಿ, ಇತರ ನಗರಗಳಲ್ಲಿರುವ ಕ್ಷಿಪ್ರ ನ್ಯಾಯಾಲಯಗಳಿಗೆ ಪ್ರತಿ ದೂರವಾಣಿಗೆ ರೂ. 2,900.00 ಗಳಂತೆ ವೆಚ್ಚ ತಗಲುವುದೆಂದು ತಿಳಿಸಿರುವರು. ಸದರಿ ದೂರವಾಣಿಗಳಿಗೆ ತಗಲುವ ವೆಚ್ಚವನ್ನು 2014-ಎ.ಜೆ-800-ಇತರೆ ವೆಚ್ಚಗಳು-1-ಇಎಫ್‌ಸಿ ಗ್ರಾಂಟ್ಸ್ ಫಾರ್ ಅಪ್‌ಗ್ರೇಡೇಷನ್ ಆಫ್ ಜ್ಯೂಡಿಷಿಯಲ್ ಅಡ್ಮಿನಿಸ್ಟ್ರೇಷನ್-101-ಗ್ರಾಂಟ್ಸ್ ಇನ್ ಏಡ್ ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸಲು ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 57 ಸೇಉನ್ಯಾ 2003, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2003**

ಕರ್ನಾಟಕ ರಾಜ್ಯದಲ್ಲಿನ ಫಾಸ್ಟ್ ಟ್ರ್ಯಾಕ್ ಕೋರ್ಟುಗಳ ಪ್ರಿಸೈಡಿಂಗ್ ಅಧಿಕಾರಿಗಳ ಕಚೇರಿ ಉಪಯೋಗಕ್ಕಾಗಿ ಕಛೇರಿಗೆ ಮಾತ್ರ ದೂರವಾಣಿ ಸೌಲಭ್ಯವನ್ನು ಒದಗಿಸಲು ಈ ಸಂಬಂಧದ ಸಂಪೂರ್ಣ ವೆಚ್ಚವನ್ನು ಕಂಪ್ಯೂಟರ್ ಮತ್ತು ಇತರೆ ಕಚೇರಿ ಸಾಮಗ್ರಿಗಳಿಗೆ ಒದಗಿಸಲಾದ ಅನುದಾನದಲ್ಲಿಯೇ ಭರಿಸತಕ್ಕದ್ದು ಎಂಬ ಷರತ್ತಿಗೆ ಒಳಪಡಿಸಿ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1325 ವೆಚ್ಚ-7:2003, ದಿನಾಂಕ: 21.11.2003 ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 30

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಚರ್ಮ ಮತ್ತು ಲೈಂಗಿಕರೋಗಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ: ರಾಘವೇಂದ್ರ ತೋಫಖಾನ್ ರವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ:**
1) ತಾ: 24.6.2002 ಮತ್ತು 12.12.2002 ರ ಸಂಖ್ಯೆ: ಎಂಇಹೆಚ್ (1):14:2002-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2) ತಾ: 22.5.2003ರ ನೋಟೀಸು.
3) ತಾ: 5.6.2003 ರ ಡಾ: ರಾಘವೇಂದ್ರ ತೋಫಖಾನ್ ರವರ ಮನವಿಪತ್ರ.

4) ತಾ: 9.7.2003 ಸಂಖ್ಯೆ: ಸಿವಿ (1) 25:2002-03ರ ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನ ಸಂಸ್ಥೆಯ ನಿರ್ದೇಶಕರ ಪತ್ರ.

**ಪೀಠಿಕೆ:**

1) ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ನಿಯೋಜನೆಯಲ್ಲಿರುವ ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ: ರಾಘವೇಂದ್ರ ತೋಫಖಾನ್ ರವರು ಸರ್ಕಾರದ ಪೂರ್ವಾನುಮತಿ ಪಡೆಯದೆ ಫ್ರಾನ್ಸ್ ದೇಶದ ಪ್ಯಾರಿಸ್‌ನಲ್ಲಿ ತಾ: 1.7.2002 ರಿಂದ 5.7.2002 ರವರೆಗೆ ಜರುಗಿದ ವರ್ಲ್ಡ್ ಕಾಂಗ್ರೆಸ್ ಆಫ್ ಡರ್ಮಟಾಲಜಿ ಸಮ್ಮೇಳನದಲ್ಲಿ ಭಾಗವಹಿಸಲು ವಿದೇಶ ಪ್ರವಾಸ ಕೈಗೊಂಡಿದ್ದರ ಮೇರೆಗೆ, ಅವರ ನಡತೆಯು 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಯ 3(i)(ii)(iii)ನೇ ನಿಯಮದ ಜೊತೆ ಓದಲಾದ ಜಾರಿಯಲ್ಲಿರುವ ಸ್ಥಾಯಿ ಆದೇಶಗಳ ಉಲ್ಲಂಘನೆಯಾಗಿರುವ ಪ್ರಯುಕ್ತ ಅವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ದಿನಾಂಕ: 22.5.2003 ರ ನೋಟೀಸನ್ನು ಜಾರಿಗೊಳಿಸಿ ಡಾ: ರಾಘವೇಂದ್ರ ತೋಫಖಾನ್ ರವರಿಗೆ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

2) ಡಾ: ರಾಘವೇಂದ್ರ ತೋಫಖಾನ್ ರವರು ಹುಬ್ಬಳ್ಳಿಯ ಕಿಮ್ಸ್‌ನ ನಿರ್ದೇಶಕ ದಿನಾಂಕ: 9.7.2003 ರ ಪತ್ರದ ಮೂಲಕ ಸಲ್ಲಿಸಿರುವ ತಾ: 5.6.2003ರ ಮನವಿಯಲ್ಲಿ ಭಾರತೀಯ ವೈದ್ಯಕೀಯ ಮಂಡಳಿಯ ಪ್ರಕಾರ ಪ್ರತಿಯೊಬ್ಬ ಶಿಕ್ಷಕನಿಗೆ ಸಮ್ಮೇಳನದಲ್ಲಿ ಪ್ರಬಂಧ ಮಂಡಿಸುವುದು ಕಡ್ಡಾಯವಾಗಿರುತ್ತದೆ. ಇಂತಹ ಅವಕಾಶವನ್ನು ಕಳೆದುಕೊಳ್ಳುವುದು ಬಹಳ ದುಃಖಕರವಾದ ಸಂಗತಿ. ಪ್ರಬಂಧ ಮಂಡಿಸಲು ಅವಕಾಶ ಬಂದಾಗ ಸರ್ಕಾರದ ಪರವಾನಿಗೆಯನ್ನು ಪಡೆಯಲು ಸೂಕ್ತ ಮಾರ್ಗದ ಮೂಲಕ 2 ತಿಂಗಳ ಮುಂಚೆಯೇ ಅರ್ಜಿಯನ್ನು ಸಲ್ಲಿಸಿದ್ದು ಅವರಿಗೆ ಯಾವ ಉತ್ತರವೂ ಬಾರದ ಕಾರಣ ಸಮ್ಮೇಳನದಲ್ಲಿ ಭಾಗವಹಿಸಿ ಹಿಂತಿರುಗಿ ಬಂದು ಕೆಲಸಕ್ಕೆ ಹಾಜರಾಗಿರುತ್ತಾರೆಂದೂ, ಸಮಯದ ಅಭಾವದ ಮೂಲಕ ಸರ್ಕಾರದ ಪೂರ್ವಾನುಮತಿಯಿಲ್ಲದೇ ಹೋಗುವ ಪ್ರಸಂಗ ಒದಗಿ ಬಂದಿತ್ತು ಎಂದು ತಿಳಿಸಿ ಈ ಸಮ್ಮೇಳನದಲ್ಲಿ ಭಾಗವಹಿಸುವುದರಿಂದ ಅವರ ವೈದ್ಯಕೀಯ ಜ್ಞಾನವನ್ನು ಹೆಚ್ಚಿಸಿಕೊಂಡಿದ್ದು ಅದರ ಪ್ರಯೋಜನೆ ವಿದ್ಯಾರ್ಥಿಗಳಿಗೆ ಆಗುತ್ತಿದೆ ಎಂದು ತಿಳಿಸಿರುತ್ತಾರೆ. ಮುಂದುವರಿದು ಅವರು ಇನ್ನು ಮುಂದೆ ಇಂತಹ ಪ್ರಸಂಗ ಬರದಂತೆ ಮುಂಜಾಗ್ರತೆ ವಹಿಸುವುದಾಗಿಯೂ ತಿಳಿಸಿರುತ್ತಾರೆ. ಅದರ ಮೇರೆಗೆ ಸರ್ಕಾರವು ಈ ಪ್ರಕರಣವನ್ನು ಸಕಲ ವಲಯಗಳಿಂದ ವಿಶ್ಲೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 92 ಎಂಎಂಸಿ 2003, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2003**

3) ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ನಿಯೋಜನೆಯಲ್ಲಿರುವ ವೈದ್ಯಕೀಯ ಶಿಕ್ಷಣ ಇಲಾಖೆಯ ಚರ್ಮ ಮತ್ತು ಲೈಂಗಿಕರೋಗಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ: ರಾಘವೇಂದ್ರ ತೋಫಖಾನ್ ರವರ ಮೇಲೆ 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ 8(ii) ರ ಮೇರೆಗೆ ವಾಗ್ದಂಡನೆ ವಿದಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 36

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ**

**ವಿಷಯ:** ವಾರ್ತಾ ಇಲಾಖೆಗೆ ಆಯುಕ್ತರು, ವಾರ್ತಾ ಇಲಾಖೆ, ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 68 ಎಸ್‌ಎಎಸ್ 2004, ದಿನಾಂಕ: 19.1.2004.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 30 ಎಸ್‌ಎಎಸ್ 2004, ದಿನಾಂಕ: 17.1.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿ ದಿನಾಂಕ: 19.1.2004 ರಲ್ಲಿ ಆಯುಕ್ತರು, ವಾರ್ತಾ ಇಲಾಖೆ ಹುದ್ದೆಯನ್ನು ಸೃಜಿಸಲು ಕೋರಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 17.1.2004 ರಲ್ಲಿ ಸರ್ಕಾರವು ಶ್ರೀ ಐ.ಎಂ. ವಿಠಲಮೂರ್ತಿ, ಐಎಎಸ್, ಅವರನ್ನು ಆಯುಕ್ತರು, ವಾರ್ತಾ ಇಲಾಖೆ, ಈ ಹುದ್ದೆಯ ಅಧಿಕ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು 10 ವಾಪ್ರಸಿ 2004, ಬೆಂಗಳೂರು, ದಿನಾಂಕ: 19ನೇ ಜನವರಿ 2004**

ಪ್ರಸ್ತಾವನೆಯಲ್ಲಿ ಹೇಳಿರುವ ವಿಷಯಗಳ ಹಿನ್ನೆಲೆಯಲ್ಲಿ ಆಯುಕ್ತರು, ವಾರ್ತಾ ಇಲಾಖೆ, ಈ ಹೊಸ ಹುದ್ದೆಗೆ ಆಯುಕ್ತರು ವರದಿ ಸಲ್ಲಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಸದರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೀತಮ್ಮ**

ಪಿ.ಆರ್. 31

ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.